## ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 61

**ಮಾನ್ಯ ಸದಸ್ಯರ ಹೆಸರು** : ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

**ಉತ್ತರಿಸಬೇಕಾದ ದಿನಾಂಕ** : 13-09-2021

**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಪರಿಸ್ಥಿತಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಯಾವ ಯಾವ ಸಮುದ್ರ ತೀರ ಮತ್ತು ನದಿ ಭಾಗಗಳಲ್ಲಿ ವಾಟರ್ ಗೇಮ್ಸ್ ಗಳನ್ನು ನಡೆಸಲು ಅನುಮತಿ ನೀಡಲಾಗುತ್ತಿದೆ; ಇಲ್ಲಿ ಯಾವ ಯಾವ ಕ್ರೀಡೆಗಳನ್ನು ನಡೆಸಲು ಅನುಮತಿ ನೀಡಲಾಗಿದೆ ಮತ್ತು ಯಾವ ಯಾವ ಏಜೆನ್ಸಿ/ಕಂಪನಿಗಳಿಗೆ ಎಷ್ಟು ವರ್ಷಗಳಿಗೆ ಅನುಮತಿ ನೀಡಲಾಗಿದೆ (ಆದೇಶ ಸಹಿತ ಸಂಸ್ಥೆವಾರು ವಿವರ ನೀಡುವುದು) | ರಾಜ್ಯದ ಸಮುದ್ರ ತೀರ ಮತ್ತು ನದಿ ಭಾಗಗಳಲ್ಲಿ ವಾಟರ್ ಗೇಮ್ಸ್ ಗಳನ್ನು ನಡೆಸಲು ಏಜೆನ್ಸಿ, ಕಂಪನಿಗಳಿಗೆ ಜಿಲ್ಲಾಡಳಿತದಿಂದ ಅನುಮತಿ ನೀಡಲಾಗಿರುವ ವಿವರಗಳನ್ನು ಅನುಬಂಧ-1 ರಲ್ಲಿ ಹಾಗೂ ಆದೇಶಗಳ ಪ್ರತಿಯನ್ನು ಅನುಬಂಧ-2 ರಲ್ಲಿ ಒದಗಿಸಿದೆ. |
| ಆ) | ಈ ಸಾಹಸ ಕ್ರೀಡೆಗಳನ್ನು ನಡೆಸುವ ಏಜೆನ್ಸಿ/ಕಂಪನಿಗಳನ್ನು ಆಯ್ಕೆ ಮಾಡಲು ಟೆಂಡರ್ ಗಳನ್ನು ಕರೆಯಲಾಗುತ್ತಿದೆಯೇ ಅಥವಾ ಬೇರೆ ಯಾವುದಾದರು ಮಾನದಂಡಗಳ ಮೇಲೆ ಆಯ್ಕೆ ಮಾಡಲಾಗುತ್ತಿದೆಯೇ; ಅನುಮತಿ ನೀಡಲು ಸರ್ಕಾರವು ನಿಗದಿಪಡಿಸಿರುವ ಮಾನದಂಡಗಳೇನು; (ಆದೇಶ ಸಹಿತ ವಿವರ ನೀಡುವುದು) | ಹೌದು.<br><br>ಸಂಬಂಧಪಟ್ಟ ಜಿಲ್ಲಾಡಳಿತದಿಂದ ಟೆಂಡರ್ ಕರೆದು ಏಜೆನ್ಸಿ/ಕಂಪನಿಗಳನ್ನು ಆಯ್ಕೆ ಮಾಡಲಾಗುತ್ತದೆ.<br><br>ಪ್ರವಾಸೋದ್ಯಮ ಇಲಾಖೆ ವತಿಯಿಂದ ಮಾನದಂಡಗಳನ್ನು ರೂಪಿಸಿರುವುದಿಲ್ಲ. ಸಂಬಂಧಪಟ್ಟ ಜಿಲ್ಲಾಡಳಿತಗಳು ಮಾನದಂಡಗಳನ್ನು ರೂಪಿಸಿ, ಟೆಂಡರ್ ಕರೆದು, ಏಜೆನ್ಸಿಗಳನ್ನು ಆಯ್ಕೆಮಾಡಿ, ಕಾರ್ಯಾದೇಶ ನೀಡುತ್ತಾರೆ.<br><br>ಮಾನದಂಡಗಳ ವಿವರವನ್ನು ಅನುಬಂಧ-3 ರಲ್ಲಿ ವಿವರಿಸಿದೆ. |
| ಇ) | ಇಲ್ಲಿ ನಡೆಸುವಂತಹ ಕ್ರೀಡೆಗಳಿಗೆ ದರಗಳನ್ನು ನಿಗದಿ ಮಾಡಲಾಗಿದೆಯೇ; (ಮಾಡಿದ್ದಲ್ಲಿ, ಅವುಗಳ ವಿವರ ನೀಡುವುದು) | ಉತ್ತರ ಕನ್ನಡ ಜಿಲ್ಲೆ, ಕಾರವಾರ ಕಡಲ ತೀರದಲ್ಲಿ ಸಾಹಸ ಕ್ರೀಡೆಗಳಿಗೆ ನಿಗಧಿ ಪಡಿಸಿರುವ ದರ ಕೆಳಕಂಡಂತಿದೆ. |

| ಕ್ರ. ಸಂ | ಕ್ರೀಡೆ | ನಿಗಧಿಪಡಿಸಿದ ದರ |
|---|---|---|
| 1 | ಜೆಟ್‌ಸ್ಕೀ | 300/- |
| 2 | ಸ್ಪೀಡ್ ಬೋಟ್ | 100/- |
| 3 | ಪ್ಯಾರಾ ಸೇಲಿಂಗ್ | 800/- |
| 4 | ಬಂಪರ್ ರೈಡ್ | 800/- |
| 5 | ಫ್ಯಾಮಿಲಿ ಬೋಟ್ | 100/- |
| 6 | ಕಯಾಕ್ | 300/- |

....2

ಉಡುಪಿ ಜಿಲ್ಲೆಯಲ್ಲಿ ಮಲ್ಪೆ ಅಭಿವೃದ್ಧಿ ಸಮಿತಿಯು ಈ ಕೆಳಕಂಡಂತೆ ದರಗಳನ್ನು ನಿಗಧಿಪಡಿಸಿರುತ್ತದೆ.

| ಕ್ರ. ಸಂ | ಕ್ರೀಡೆ | ನಿಗಧಿಪಡಿಸಿದ ದರ |
|---|---|---|
| 1 | ಪ್ರವಾಸಿ ಬೋಟ್‌ಗಳು | 250/- |
| 2 | ರೌಂಡಿಂಗ್ ಬೋಟ್ | 100/- |
| 3 | ವಾಟರ್ ಸ್ಕೂಟಿ ಬೋಟ್ | 250/- |

ಕೊಡಗು ಜಿಲ್ಲೆಯಲ್ಲಿ ರಿವರ್ ರಾಫ್ಟಿಂಗ್ ನಡೆಸುವವರು ಪ್ರವಾಸಿಗರಿಂದ/ ಸವಾರರಿಂದ ಪಡೆಯುವ ಟಿಕೇಟ್ ದರ ಸೀಸನ್‌ನಲ್ಲಿ **ರೂ.**600.00ಗಳು ಪ್ರತಿ ಸವಾರ(ವಯಸ್ಕ), ಆಫ್ ಸೀಸನ್‌ನಲ್ಲಿ **ರೂ.**200.00ಗಳ ದರ ನಿಗಧಿಪಡಿಸಿರುತ್ತಾರೆ.

**ಈ)** ಕಾಳಿ ನದಿಯ ತೀರದಲ್ಲಿ ಇರುವ ಹೋಟೆಲ್ ಮತ್ತು ರೆಸಾರ್ಟ್ ಗಳು ಅಕ್ರಮವಾಗಿ ಇಂತಹ ಕ್ರೀಡೆಗಳನ್ನು ನಡೆಸುತ್ತಿದ್ದು ಸದರಿಯವರಿಗೆ ಸಾರ್ವಜನಿಕರಿಂದ ಬೇಕಾಬಿಟ್ಟಿಯಾಗಿ ಹಣ ವಸೂಲಿ ಮಾಡುತ್ತಿರುವುದು ಮತ್ತು ಸುರಕ್ಷತ ಕ್ರಮಗಳನ್ನು ಕೈಗೊಳ್ಳದೇ ಇದನ್ನೇ ದಂಧೆಯಾಗಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಸರ್ಕಾರದಿಂದ ಅನುಮತಿ/ ಪರವಾನಿಗೆ ನೀಡಲಾಗಿದ್ದಲ್ಲಿ ಯಾವಾಗ? (ದಾಖಲೆ ಪ್ರತಿ ಒದಗಿಸುವುದು ಬಂದಿದ್ದಲ್ಲಿ, ಈ ಸಂಬಂಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು))

ಬಂದಿದೆ.

ಅನುಮತಿ/ಪರವಾನಗಿ ನೀಡಿರುವ ವಿವರವನ್ನು ಅನುಬಂಧ-1 ಹಾಗೂ 2ರಲ್ಲಿ ಒದಗಿಸಿದೆ.

ಪ್ರವಾಸಿಗರ ಸುರಕ್ಷತಾ ಹಿತದೃಷ್ಟಿಯಿಂದ, ಉತ್ತರ ಕನ್ನಡ ಜಿಲ್ಲೆ ಸಮುದ್ರ ಹಾಗೂ ನದಿ ತೀರಗಳಲ್ಲಿ ಲೈಫ್ ಜಾಕೇಟ್ ಧರಿಸದೇ ಜಲಕ್ರೀಡೆ ನಡೆಸುತ್ತಿರುವವರಿಗೆ ಉತ್ತರ ಕನ್ನಡ ಜಿಲ್ಲೆ, ಜಿಲ್ಲಾಡಳಿತದಿಂದ ನೋಟೀಸ್ ನೀಡಲಾಗಿರುತ್ತದೆ. ವಿವರಗಳನ್ನು ಅನುಬಂಧ-4 ರಲ್ಲಿಒದಗಿಸಿದೆ.

**ಉ)** ಇಂತಹ ಕ್ರೀಡೆಗಳನ್ನು ನಡೆಸುವವರಿಗೆ ಸರ್ಕಾರ ನೀಡುತ್ತಿರುವ ಸವಲತ್ತುಗಳೇನು ಮತ್ತು ಈ ಕ್ರೀಡೆಗಳಿಗೆ ಅನುಮತಿ ನೀಡಿರುವುದರಿಂದ ಕಳೆದ 3 ವರ್ಷಗಳಲ್ಲಿ ಸರ್ಕಾರಕ್ಕೆ ಬಂದಿರುವ ಆದಾಯವೆಷ್ಟು? (ವಿವರ ನೀಡುವುದು)

ಈ ಕ್ರೀಡೆಗಳನ್ನು ನಡೆಸಲು ಸಂಬಂಧಪಟ್ಟ ಜಿಲ್ಲಾಡಳಿತಗಳು ಅನುಮತಿ ನೀಡಿದ್ದು, ಕಳೆದ 3 ವರ್ಷಗಳಲ್ಲಿ ಬಂದಿರುವ ಆದಾಯದ ವಿವರ ಕೆಳಗಿನಂತಿದೆ.

| ಕ್ರ. ಸಂ | ಜಿಲ್ಲೆ | ವರ್ಷ | | |
|---|---|---|---|---|
| | | 2018-19 | 2019-20 | 2020-21 |
| 1 | ಉತ್ತರಕನ್ನಡ, ಕಾರವಾರ | - | - | 47,61,469/- |
| 2 | ಉಡುಪಿ | - | - | 2,25,000/- |
| 3 | ದಕ್ಷಿಣ ಕನ್ನಡ | - | - | - |
| 4 | ಕೊಡಗು | 21,000/- | 13,92,290/- | 5,10,000/- |

TOR 181 TDV 2021

**(ಆನಂದ್ ಸಿಂಗ್)**
ಪ್ರವಾಸೋದ್ಯಮ ಹಾಗೂ
ಪರಿಸರ ಮತ್ತು ಜೀವಿಪರಿಸ್ಥಿತಿ ಸಚಿವರು

# ಅನುಬಂಧ-1

## ಶ್ರೀ ಎಂ.ಎ ಗೋಪಾಲಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ, ಪ್ರಶ್ನೆ 38(61)

| ಕ್ರಸಂ | ಜಿಲ್ಲೆಯ ಹೆಸರು | ಸಮುದ್ರ ತೀರ ಮತ್ತು ನದಿ ತೀರದ ಹೆಸರು | ವಾಟರ್ ಗೇಮ್ಸ್/ಕ್ರೀಡೆಗಳ ಹೆಸರು | ಮಾಲೀಕರು/ಏಜೆನ್ಸಿಗಳ ಹೆಸರು | ಅನುಮತಿ ನೀಡಿರುವ ಅವಧಿ |
|---|---|---|---|---|---|
| 1 | ಕಾರವಾರ | ಕಾರವಾರ, ಗೋಕರ್ಣ, ಮುರುಡೇಶ್ವರ, ಅರಬ್ಬಿ ಸಮುದ್ರ ಹಾಗೂ ಅಘನಾಶಿನಿ, ಶರಾವತಿ ಹಾಗೂ ಕಾಳಿ ನದಿ | ಜೆಟ್‌ಸ್ಕೀ, ಸ್ಪೀಡ್ ಬೋಟ್, ಕಯಾಕ, ಬನಾನ ರೈಡ್, ಪ್ಯಾರಾಸ್ಟೈಲಿಂಗ್, ಬಂಪರ್ ಬೋಟ್, ಫ್ಯಾಮಿಲಿ ಟೂರಿಸ್ಟ್ ಬೋಟ್ | 1. ಶ್ರೀ ಅನೀಶ ಗಣಪತಿ ಉಳ್ವೇಕರ, ಮೆ॥ ವೇವ್ ಅಡ್ವೆಂಚರ್ಸ್ : ರವೀಂದ್ರನಾಥ ಟ್ಯಾಗೋರ್ ಬೀಚ್ | 5 ವರ್ಷ ಅವಧಿ |
| | | | | 2.ಶ್ರೀ ಗಣೇಶ ಡಿ. ಗಾಂವಕರ : ಓಂ ಬೀಚ್, ಕುಡ್ಲೆ ಬೀಚ್ ಮತ್ತು ಗೋಕರ್ಣ ಬೀಚ್ | 5 ವರ್ಷ ಅವಧಿ |
| | | | | 3.ಹರಿಕಾಂತ ವೆಂಕಟೇಶ, ಮೆ॥ ಓಶಿಯನ್ ಅಡ್ವೆಂಚರ್ಸ್: ಮುರ್ಡೇಶ್ವರ ಬೀಚ್ | 3 ವರ್ಷ ಅವಧಿ |
| 2 | ಉಡುಪಿ | ಮಲ್ಪೆ ಮತ್ತು ಸೈಂಟ್ ಮೇರಿಸ್ ಕಡಲತೀರ, ಕಾಪು ಕಡಲ ತೀರ ಹಾಗೂ ಕೋಡಿ ಬೇಂಗ್ರೆ, ಸ್ವರ್ಣ, ಸೀತಾನದಿ ಮತ್ತು ಗಂಗೊಳ್ಳಿ, ಪಡುತೋಣಸೆ ನದಿ ತೀರ | ಜೆಟ್‌ಸ್ಕೀ, ಸ್ಪೀಡ್ ಬೋಟ್, ಕಯಾಕ, ಬನಾನ ರೈಡ್, ಪ್ಯಾರಾಸ್ಟೈಲಿಂಗ್, ಬಂಪರ್ ಬೋಟ್, ಫ್ಯಾಮಿಲಿ ಟೂರಿಸ್ಟ್ ಬೋಟ್ | 1. ಶ್ರೀ ಆವಿತ್ ಡಿಸೋಜಾ, ಮೆ॥ ಪಿಕ್ನಿಕ್ ಪ್ಯಾರಡೈಸ್ ಟೂರಿಸ್ಟ್ ಬೋಟ್, Pickup & Drop : ಶ್ರೀ ಹನುಮಾನ್ ವಿಠೋಬಾ ಭಜನ ಮಂದಿರ, ಪರ್ಲಕಾಡು – ಕುಕ್ಕುದೆ ಸ್ಕೂಲ್, ರಾಮ ಮಂದಿರ ಹತ್ತಿರ, ಹರಡಿ ವಿಲೇಜ್ | 2 ವರ್ಷ ಅವಧಿ |
| | | | | 2. ಶ್ರೀ. ರಾಬರ್ಟ್ ಜೋಸೆಫ್ ಡಿಸೋಜಾ, ಮೆ: ಜಾಸ್ ಟೂರಿಸ್ಟ್ ಬೋಟ್ : House Boat, ಸ್ವರ್ಣ ನದಿ ತೀರ, ಪಡುತೋಣಸೆ | 2 ವರ್ಷ ಅವಧಿ |
| | | | | 3. ಶ್ರೀ ಎರಿಕ್ ಲೂಯಿಸ್, .ಮೆ: ಕಿಂಗ್ ಆಫ್ ಕಿಂಗ್ ಟೂರಿಸ್ಟ್ ಬೋಟ್ : Pickup & Drop : ಉಪ್ಪಿನಕೋಟೆ– ಬಾಳ್ಕುದ್ರು, ಕಿಂಗ್ ಆಫ್ ಕಿಂಗ್ ಪಿಕ್ನಿಕ್ ಪಾಯಿಂಟ್ – ಗಾಲದಕಟ್ಟೆ , ಬ್ರಹ್ಮಾವರ–ಉಪ್ಪಿನಕೋಟೆ. | 2 ವರ್ಷ ಅವಧಿ |
| | | | | 4. ಶ್ರೀ ಜೇಮ್ಸ್ ಡಿಸಿಲ್ವ, ಮೆ॥ ರಿಲ್ಯಾಕ್ಸ್ ಲೀಸರ್ ಪಾರ್ಕ್, ಟೂರಿಸ್ಟ್ ಬೋಟ್ಸ್: Pickup & Drop, ಗಾಲದಕಟ್ಟೆ– ಬಾಳ್ಕುದ್ರು, ಉಪ್ಪಿನಕೋಟೆ– ಬ್ರಹ್ಮಾವರ | 2 ವರ್ಷ ಅವಧಿ |
| | | | | 5. ಶ್ರೀಮತಿ ಸುಜಾತ ಆರ್. ಕಾಮತ್, ಮೆ: ಪಾಂಚಜನ್ಯ ಕ್ರೂಯಿಸ್ : House Boat, ಸ್ವರ್ಣ ನದಿ ತೀರ, ಪಡುತೋಣಸೆ | 2 ವರ್ಷ ಅವಧಿ |
| | | | | 6. ಶ್ರೀ. ಕೃಷ್ಣ ಬಿ. ಕುಂದೂರ್ : House Boat, ಸ್ವರ್ಣ ನದಿ ತೀರ, ಕೋಡಿ ಬೆಂಗ್ರೆ | 2 ವರ್ಷ ಅವಧಿ |
| | | | | 7. ಶ್ರೀಮತಿ. ಪದ್ಮ ಕೆ. ರಾವ್, ಮೆ॥ ರಿವರ್ ಮಿಸ್ಟ್ ತಾನ್ಸ ಹೌಸ್ ಬೋಟ್ : House Boat, ಸ್ವರ್ಣ ನದಿ ತೀರ | 2 ವರ್ಷ ಅವಧಿ |
| | | | | 8. ಶ್ರೀಮತಿ. ಪೂರ್ಣಿಮಾ ವಿ. ದೇವಾಡಿಗ, ಮೆ: ಗಂಗೋತ್ರಿ ಹಾಲಿಡೇಸ್ ಕ್ರೂಯಿಸ್ ಹೌಸ್ ಬೋಟ್ : House Boat, ಸೌಪರ್ಣಿಕ ನದಿ ತೀರ | 2 ವರ್ಷ ಅವಧಿ |
| | | | | 9. ಶ್ರೀ ಕೆ. ಹರಿಪ್ರಸಾದ್, ಕರ್ನಾಟಕ ರೆಕ್ & ಸ್ಕೂಬಾ ಡೈವರ್ಸ್, Shipwreck Diving, ಶಿರೂರು ಬೀಚ್, ಬೈಂದೂರು ತಾಲ್ಲೂಕು | 2 ವರ್ಷ ಅವಧಿ |

| ಕ್ರ.ಸಂ | ಜಿಲ್ಲೆಯ ಹೆಸರು | ಸಮುದ್ರ ತೀರ ಮತ್ತು ನದಿ ತೀರದ ಹೆಸರು | ವಾಟರ್ ಗೇಮ್ಸ್/ಕ್ರೀಡೆಗಳ ಹೆಸರು | ಮಾಲೀಕರು/ಏಜೆನ್ಸಿಗಳ ಹೆಸರು | ಅನುಮತಿ ನೀಡಿರುವ ಅವಧಿ |
|---|---|---|---|---|---|
| | | | | 10. ಶ್ರೀ ರೋಹಿತ್, ಮೆ॥ ಶ್ರೀ ಮೂಕಾಂಬಿಕಾ ಟೂರಿಸ್ಟ್ ಬೋಟ್ :<br>ಸ್ವರ್ಣ ನದಿ ತೀರ, ಪಡುಕೋಣಸೆ ಕ್ರಾಸಿಂಗ್ | 2 ವರ್ಷ ಅವಧಿ |
| | | | | 11,. ಶ್ರೀ ಸನತ್ ಸಾಲ್ಯಾನ್, : ಮಲ್ಪೆ ಬೀಚ್ ನಿಂದ ಸೇಂಟ್ ಮೇರೀಸ್ ದ್ವೀಪಕ್ಕೆ ಕರೆದುಕೊಂಡು ಹೋಗಿ ವಾಪಸ್ ಕರೆತರಲು : ಮಲ್ಪೆ ಬೀಚ್ | 3+2 (5 ವರ್ಷ ಅವಧಿ) |
| | | | | 12. ಶ್ರೀ ಅಶೋಕ ಸುವರ್ಣ, : ಮಲ್ಪೆ ಬೀಚ್ ನಿಂದ ಸೇಂಟ್ ಮೇರೀಸ್ ದ್ವೀಪಕ್ಕೆ ಕರೆದುಕೊಂಡು ಹೋಗಿ ವಾಪಸ್ ಕರೆತರಲು : ಮಲ್ಪೆ ಬೀಚ್ | 3+2 (5 ವರ್ಷ ಅವಧಿ) |
| | | | | 13. ಶ್ರೀ ದಾಮೋದರ ಕರ್ಕೇರ : ಮಲ್ಪೆ ಬೀಚ್ ನಿಂದ ಸೇಂಟ್ ಮೇರೀಸ್ ದ್ವೀಪಕ್ಕೆ ಕರೆದುಕೊಂಡು ಹೋಗಿ ವಾಪಸ್ ಕರೆತರಲು : ಮಲ್ಪೆ ಬೀಚ್ | 3+2 (5 ವರ್ಷ ಅವಧಿ) |
| | | | | 14. ಶ್ರೀ ಕೆನ್ಯೂಟ್ ಲೂಯಿಸ್ : ಮಲ್ಪೆ ಬೀಚ್ ನಿಂದ ಸೇಂಟ್ ಮೇರೀಸ್ ದ್ವೀಪಕ್ಕೆ ಕರೆದುಕೊಂಡು ಹೋಗಿ ವಾಪಸ್ ಕರೆತರಲು : ಮಲ್ಪೆ ಬೀಚ್ | 3+2 (5 ವರ್ಷ ಅವಧಿ) |
| | | | | 15. ಶ್ರೀ ಸದಾನಂದ ಅಮೀನ್ : ಮಲ್ಪೆ ಬೀಚ್ ನಿಂದ ಸೇಂಟ್ ಮೇರೀಸ್ ದ್ವೀಪಕ್ಕೆ ಕರೆದುಕೊಂಡು ಹೋಗಿ ವಾಪಸ್ ಕರೆತರಲು : ಮಲ್ಪೆ ಬೀಚ್ | 3+2 (5 ವರ್ಷ ಅವಧಿ) |
| | | | | 16. ಶ್ರೀ ಪ್ರವೀಣ್ ಕುಮಾರ್ : ಮಲ್ಪೆ ಬೀಚ್ ನಿಂದ ಸೇಂಟ್ ಮೇರೀಸ್ ದ್ವೀಪಕ್ಕೆ ಕರೆದುಕೊಂಡು ಹೋಗಿ ವಾಪಸ್ ಕರೆತರಲು : ಮಲ್ಪೆ ಬೀಚ್ | 3+2 (5 ವರ್ಷ ಅವಧಿ) |
| | | | | 17. ಶ್ರೀ ಉದಯ್ ಕುಮಾರ್ : ಮಲ್ಪೆ ಬೀಚ್ ನಿಂದ ಸೇಂಟ್ ಮೇರೀಸ್ ದ್ವೀಪಕ್ಕೆ ಕರೆದುಕೊಂಡು ಹೋಗಿ ವಾಪಸ್ ಕರೆತರಲು : ಮಲ್ಪೆ ಬೀಚ್ | 3+2 (5 ವರ್ಷ ಅವಧಿ) |
| | | | | 18. ಹರೀಶ್ ಹರಿಕಾಂತ್ : ವಾಟರ್ ಸ್ಕೂಟಿ ಬೋಟ್ : ಮಲ್ಪೆ ಬೀಚ್ | 3+2 (5 ವರ್ಷ ಅವಧಿ) |
| 3 | ದಕ್ಷಿಣ ಕನ್ನಡ | ಗುರುಪುರ ನದಿ ತಟ | ಸ್ಪೀಡ್ ಬೋಟ್, ಜೆಟ್‌ಸ್ಕೀ, ಬನಾನ ಬೋಟ್, ಬಂಪ್ಪಿರೈಡ್, ಫ್ಲೈ ಫಿಶ್, ಪೆಡಲ್ ಬೋಟ್, ಕಯಾಕಿಂಗ್, ಸ್ಲೀಪರ್ ಬಂಪರ್, ಇನ್ ಫ್ಲೇಟೇಬಲ್ ಟವೇಬಲ್ ಬೋಟ್, ಸ್ನೋರ್ ಕೆಲಿಂಗ್ ಮತ್ತು ಸ್ಟಿಕ್ಕರ್ ಬೋಟ್ | 1. ಶ್ರೀ ಶಿವಕುಮಾರ್ ಪೈಲೂರ್, ಮೆ॥ ಸಮೃದ್ಧಿ ವಾಟರ್ ಸ್ಪೋರ್ಟ್ಸ್ : | 5 ವರ್ಷ ಅವಧಿ |
| | | | | 2. ಶ್ರೀ ಮಯೂರ್ ಉಳ್ಳಾಲ, ಮೆ॥ ಸಮ್ರಾಟ ಅಸೋಸಿಯೇಟ್ಸ್ : ಗುರುಪುರ ನದಿ ತಟ | 5 ವರ್ಷ ಅವಧಿ |
| | | | | 3. ಶ್ರೀ ಪ್ರಕಾಶ್ ಶೆಟ್ಟಿ, ಮೆ॥ ಮರವೂರು ರಿವರ್ ಬರ್ಡ್ : ಪಾಲ್ಗುಣಿ ನದಿ | 5 ವರ್ಷ ಅವಧಿ |
| | | | | 4. ಶ್ರೀ ರವಿ ಪೌಲ್ , ವ್ಯವಸ್ಥಾಪಕರು, ಮೆ॥ ವಂಡರ್ ಪ್ಲಾಷ್ : ಗುರುಪುರ ನದಿ ತಟ | 5 ವರ್ಷ ಅವಧಿ |
| | | | | 5. ಶ್ರೀ ಹರೀಶ್ ಹರಿಕಾಂತ, ಮೆ॥ನೇತ್ರಾಣಿ ಸ್ನೊರ್ಕೆಲಿಂಗ್ ಅಡ್ವೆಂಚರ್ಸ್ : ಗುರುಪುರ ನದಿ ತಟ | 5 ವರ್ಷ ಅವಧಿ |

| ಕ್ರಸಂ | ಜಿಲ್ಲೆಯ ಹೆಸರು | ಸಮುದ್ರ ತೀರ ಮತ್ತು ನದಿ ತೀರದ ಹೆಸರು | ವಾಟರ್ ಗೇಮ್ಸ್/ಕ್ರೀಡೆಗಳ ಹೆಸರು | ಮಾಲೀಕರು/ಏಜೆನ್ಸಿಗಳ ಹೆಸರು | ಅನುಮತಿ ನೀಡಿರುವ ಅವಧಿ |
|---|---|---|---|---|---|
| 4 | ಕೊಡಗು | ದುಬಾರೆ ಕಾವೇರಿ ನದಿ | ರಿವರ್ ರ್‍ಯಾಫ್ಟಿಂಗ್ | 1. ಶ್ರೀ ಪಿ.ಸಿ ವಸಂತ, ಮೆ॥ ಪಾರೇರಾ ರ್‍ಯಾಫ್ಟಿಂಗ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 2. ಶ್ರೀ ಚೇತನ್ ಟಿ.ಯು, ಮೆ॥ ಕೂರ್ಗ್ ವಾಟರ್ ಲ್ಯಾಂಡ್ ಅಡ್ವೆಂಚರ್ ದುಬಾರೆ : ಕಾವೇರಿ ನದಿ | 1 ವರ್ಷ ಅವಧಿ |
| | | | | 3. ಶ್ರೀಮತಿ ಬಿ.ಪಿ ಶಾಂತಿ ಕೃಷ್ಣಪ್ಪ, ಮೆ॥ ಎನ್.ಕೆ. ಜಾಗ್ವರ್, ದುಬಾರೆ ರಿವರ್ ರ್‍ಯಾಫ್ಟಿಂಗ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 4. ಶ್ರೀ ಸಿ.ಎಲ್ ವಿಶ್ವ, ಮೆ॥ ಸನ್ನಿಧಿ ರಿವರ್ ರ್‍ಯಾಫ್ಟಿಂಗ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 5. ಶ್ರೀ ಎನ್.ಟಿ ಸಾಗರ್, ಮೆ॥ ಕೂರ್ಗ್ ರೆಸಾರ್ಟ್ಸ್ ಅಂಡ್ ರ್‍ಯಾಫ್ಟಿಂಗ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 6. ಶ್ರೀ ಎಮ್.ಸಿ ದಾಮೋದರ, ಮೆ॥ ಟೀಮ್ ಮಾವಜೀ ರಿವರ್ ರ್‍ಯಾಫ್ಟಿಂಗ್ ಅಂಡ್ ಅಡ್ವೆಂಚರ್ಸ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 7. ಶ್ರೀ ಜಿ.ಆರ್ ಸುಜಿತ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 8. ಶ್ರೀ ಕೆ.ಪ್ರಮೋದ್ ಮುತ್ತಪ್ಪ, ಮೆ॥ ದಿ ಗ್ರೇಟ್ ಕೂರ್ಗ್ ರಿವರ್ ರ್‍ಯಾಫ್ಟಿಂಗ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 9. ಶ್ರೀ ಎಂ.ಆರ್ ಉತ್ತಪ್ಪ, ಮೆ॥ ಗಂಗಾ ರಿವರ್ ರ್‍ಯಾಫ್ಟಿಂಗ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 10. ಶ್ರೀ ಎಂ.ಪಿ ಯೋಗನಂದಾ, ಕಾವೇರಿ ನದಿ | 1 ವರ್ಷ ಅವಧಿ |
| | | | | 11. ಶ್ರೀ ವಿಪ್ಪನ್.ಕೆ.ಜಿ, ಮೆ॥ ಕೂರ್ಗ್ ವೇವ್ಸ್ ರಿವರ್ ರ್‍ಯಾಫ್ಟಿಂಗ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 12..ಶ್ರೀ ಕೆ.ಎಸ್ ರತೀಶ್, ಮೆ॥ ದುಬಾರೆ ಇನ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 13. ಶ್ರೀ ಬಿ.ಸಿ ಮಾದಯ್ಯ, ಮೆ॥ ಕಾವೇರಿ ರಿವರ್ ಅಡ್ವೆಂಚರ್ಸ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 14. ಶ್ರೀ ರುಕ್ಮಯ್ಯ ಕೆ.ಕೆ, ಮೆ॥ ಸಿ.ಸಿ. ಫ್ಲ್ಯಾಮ್ ವಾಟರ್ ಅಡ್ವೆಂಚರ್ಸ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 15. ಶ್ರೀ ಮಂಜುನಾಥ ಹೆಚ್.ಎಸ್, ಮೆ॥ ಶ್ರೀ ಕಾಲಭೈರವೇಶ್ವರ ರಿವರ್ ಅಡ್ವೆಂಚರ್ಸ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 16. ಶ್ರೀ ಎಂ.ಎನ್ ಯಾದವ್‌ಕುಮಾರ್, ಮೆ॥ ಓಂ ಲಾವೇರಿ ರಿವರ್ ಅಡ್ವೆಂಚರ್ಸ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 17. ಶ್ರೀ ಬಿ.ಜಿ ಹನಿಕುಮಾರ್, ಮೆ॥ ಆರ್.ಕೆ ರಿವರ್ ರ್‍ಯಾಫ್ಟಿಂಗ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 18. ಶ್ರೀ ದೈವೇಂದ್ರ, ಮೆ॥ ಡ್ರೀಮ್ ಕೂರ್ಗ್ ರಿವರ್ ಅಡ್ವೆಂಚರ್ಸ್ ಸಂಸ್ಥೆ : ಕಾವೇರಿ ನದಿ | 1 ವರ್ಷ ಅವಧಿ |
| | | | | 19. ಶ್ರೀ ಪಿ.ಟಿ ಪೊನ್ನಪ್ಪ, ಮೆ॥ ಫ್ರೆಂಡ್ಸ್ ರ್‍ಯಾಫ್ಟಿಂಗ್ ಸಂಸ್ಥೆ : ಕಾವೇರಿ ನದಿ | 1 ವರ್ಷ ಅವಧಿ |
| | | | | 20. ಶ್ರೀ ಚಿದಾನಂದ, ಮೆ॥ ದುಬಾರೆ ರ್‍ಯಾಫ್ಟಿಂಗ್ ಸೆಂಟರ್: ಕಾವೇರಿ ನದಿ | 1 ವರ್ಷ ಅವಧಿ |
| | | | | 21. ಶ್ರೀ ಎಮ್ ಕೆ ಚಂಗಪ್ಪ, ಮೆ॥ ಎ.ಬಿ ಅಡ್ವೆಂಚರ್ಸ್ ಸಂಸ್ಥೆ, ಕಾವೇರಿ ನದಿ | 1 ವರ್ಷ ಅವಧಿ |
| | | | | 22. ಶ್ರೀ ಶ್ರೀಜೇಶ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 23. ಶ್ರೀ ಮೊಯ್ದು ಕುಂಜ್ಞಿ ; ಕಾವೇರಿ ನದಿ | 1 ವರ್ಷ ಅವಧಿ |
| | | | | 24. ಶ್ರೀ ಅಲವಿ ಎಂ. : ಕಾವೇರಿ ನದಿ | 1 ವರ್ಷ ಅವಧಿ |
| | | | | 25. ಶ್ರೀ ರವಿ ಎಸ್, ಮೆ॥ ದೃಶ್ಯ ರಿವರ್ ರೈಡರ್ಸ್ : ಕಾವೇರಿ ನದಿ | 1 ವರ್ಷ ಅವಧಿ |

| ಕ್ರ.ಸಂ | ಜಿಲ್ಲೆಯ ಹೆಸರು | ಸಮುದ್ರ ತೀರ ಮತ್ತು ನದಿ ತೀರದ ಹೆಸರು | ವಾಟರ್ ಗೇಮ್ಸ್/ಕ್ರೀಡೆಗಳ ಹೆಸರು | ಮಾಲೀಕರು/ಏಜೆನ್ಸಿಗಳ ಹೆಸರು | ಅನುಮತಿ ನೀಡಿರುವ ಅವಧಿ |
|---|---|---|---|---|---|
| | | | | 26. ಶ್ರೀ ಪ್ರಭಾಕರ್ ಸಿ ಜಿ : ಕಾವೇರಿ ನದಿ | 1 ವರ್ಷ ಅವಧಿ |
| | | | | 27. ಶ್ರೀ ರಾಜೇಶ್ ಟಿ ಎ : ಕಾವೇರಿ ನದಿ | 1 ವರ್ಷ ಅವಧಿ |
| | | | | 28. ಎಸ್ ಆರ್ ಅನುಪಮ : ಕಾವೇರಿ ನದಿ | 1 ವರ್ಷ ಅವಧಿ |
| | | | | 29. ಶ್ರೀ ವಿನಯ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 30. ಶ್ರೀ ಸಿ.ವಿ.ಸತೀಶ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 31. ಶ್ರೀ ಶಿವರಾಮ್ ಎ.ಆರ್., ಮೆ॥ ಬಸವೇಶ್ವರ ರ್‍ಯಾಫ್ಟಿಂಗ್ ಅಡ್ವೆಂಚರ್ಸ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 32. ಶ್ರೀ ನವೀನ್ ಟಿ.ಟಿ, ಮೆ॥ ದುಬಾರೆ ರಿವರ್ ಅಡ್ವೆಂಚರ್ಸ್ : ಕಾವೇರಿ ನದಿ | 1 ವರ್ಷ ಅವಧಿ |
| | | | | 33. ಶ್ರೀ ಪಿ.ಬಿ. ಪೂವಯ್ಯ, ಮೆ॥ ಕೊಡಗು ವೈಟ್ ವಾಟರ್ ರಿವರ್ ರ್‍ಯಾಫ್ಟಿಂಗ್ ಪ್ರೈ.ಲಿ : ಕಾವೇರಿ ನದಿ | 1 ವರ್ಷ ಅವಧಿ |

ಕರ್ನಾಟಕ ಸರ್ಕಾರ
ಪ್ರವಾಸೋದ್ಯಮ ಇಲಾಖೆ

# ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಸಮಿತಿ ರವರ ಕಾರ್ಯಾಲಯ

ಉತ್ತರಕನ್ನಡ ಜಿಲ್ಲೆ, ಮಿನಿವಿಧಾನ ಸೌಧ, ಕಾರವಾರ-581301
email: dckarwar@gmail.com
Ph: 08382-221172

ದಿನಾಂಕ: 23.11.2020

ನಂ: ಪ್ರ.ಇ/ಉ.ನಿ.ಕ/ಕಾ/2020-21

## ತಿದ್ದುಪಡಿ ಆದೇಶ

ವಿಷಯ: ಉತ್ತರಕನ್ನಡ ಜಿಲ್ಲೆಯ ಭಟ್ಕಳ ತಾಲ್ಲೂಕಿನ ಮುರ್ಡೇಶ್ವರ ಕಡಲ ತೀರದಲ್ಲಿ ಜಲ ಕ್ರೀಡೆ ಹಾಗೂ ಜಲ ಸಾಹಸ ಕ್ರೀಡೆಗಳನ್ನು ನಡೆಸಲು ಗುತ್ತಿಗೆ ಹಾಗೂ ಲೈಸನ್ಸ್ ಸಾತೆಯಿಂದ ಐದು ವರ್ಷ ಅವಧಿಗೆ ನೀಡುವ ಕುರಿತು.

ಉಲ್ಲೇಖ:
1. ಸಮಸಂಖ್ಯೆಯ ಆದೇಶ ದಿನಾಂಕ: 26.09.2020
2. ಗುತ್ತಿಗೆದಾರರ ಮನವಿ

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉತ್ತರಕನ್ನಡ ಜಿಲ್ಲೆಯ ಭಟ್ಕಳ ತಾಲ್ಲೂಕಿನ ಮುರ್ಡೇಶ್ವರ ಕಡಲ ತೀರದಲ್ಲಿ ಜಲ ಕ್ರೀಡೆ ಹಾಗೂ ಜಲಸಾಹಸ ಕ್ರೀಡೆಗಳನ್ನು ನಡೆಸಲು ಇ-ಟೆಂಡರ್ ಟಿಪ್ಪಣಿ. ಹೆಚ್-1 ಟೆಂಡರುದಾರರಾದ ಶ್ರೀ ಹರಿಕಾಂತ್ ವೆಂಕಟೇಶ್, ಒಸಿಯನ್ ಅಡ್ವೆಂಚರ್ಸ್, ಅಂಕೋಲ ರವರಿಗೆ ಉಲ್ಲೇಖ(1) ರೀತ್ಯಾ ವಾರ್ಷಿಕ ಲೀಸ್ ಮೊತ್ತ ರೂ. 1,28,99,999/- (ಒಂದು ಕೋಟಿ ಇಪ್ಪತ್ತೆಂಟು ಲಕ್ಷದ ತೊಂಬತ್ತೊಂಬತ್ತು ಸಾವಿರದ ಒಂಬೈನೂರ ತೊಂಬತ್ತೊಂಬತ್ತು ರೂಪಾಯಿಗಳು ಮಾತ್ರ) ಗಳನ್ನು 12 ಸಮ ಕಂತುಗಳಲ್ಲಿ ಜಿಲ್ಲಾ ಪ್ರವಾಸೋದ್ಯಮ ಸಮಿತಿಗೆ ಭರಿಸುವಂತೆ ಆದೇಶಿಸಿರುತ್ತದೆ ಹಾಗೂ ಮಳೆಗಾಲದ ಮೂರು ತಿಂಗಳು ಅಂದರೆ ಜೂನ್, ಜುಲೈ ಹಾಗೂ [illegible] ಮಾಹೆಗಳನ್ನು ಹೊರತುಪಡಿಸಿ ಉಳಿದ ಒಂಬತ್ತು ಮಾಹೆಗಳಲ್ಲಿ ಜಲಸಾಹಸ ಕ್ರೀಡೆಗಳನ್ನು ನಡೆಸುವಂತೆ ಸೂಚಿಸಲಾಗಿರುತ್ತದೆ. ಉಲ್ಲೇಖ (2) ರಂತೆ ಸದರಿ ಗುತ್ತಿಗೆದಾರರು ಮನವಿ ಸಲ್ಲಿಸಿ ಸದರಿ ಆದೇಶದಲ್ಲಿ ಲೀಸ್ ಮೊತ್ತವನ್ನು 12 ಸಮ ಕಂತುಗಳಲ್ಲಿ ಪಾವತಿ ಮಾಡಲು ಸೂಚಿಸಿರುವುದರಿಂದಲೂ ಹಾಗೂ ಜಲಸಾಹಸ ಕ್ರೀಡೆಯನ್ನು 9 ತಿಂಗಳು ಮಾತ್ರ ನಡೆಸುವಂತೆ ಆದೇಶಿಸಿರುವುದರಿಂದಲೂ, ಸದರಿ ಉಲ್ಲೇಖ (1) ರ ಆದೇಶವು ಸಾರ್ವಜನಿಕರಲ್ಲಿ ಗೊಂದಲಗಳನ್ನು [illegible] ಮಾಡುತ್ತಿರುವುದರಿಂದ, ಸದರಿ ಆದೇಶವನ್ನು ತಿದ್ದುಪಡಿ ಮಾಡಿಕೊಡುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಉಲ್ಲೇಖ (1) ರ ಆದೇಶದಲ್ಲಿ ಈ ಕೆಳಗಿನಂತೆ ತಿದ್ದುಪಡಿ ಮಾಡಿ ಆದೇಶಿಸಿದೆ. ಉಳಿದಂತೆ ಉಲ್ಲೇಖ (1) ರ ಆದೇಶದಲ್ಲಿ ನಮೂದಿಸಿರುವ ಎಲ್ಲಾ ಷರತ್ತುಗಳು ಮುಂದುವರೆಯುತ್ತವೆ.

1. ಲೀಸ್ ಮೊತ್ತ ರೂ. 1,28,99,999/- (ಒಂದು ಕೋಟಿ ಇಪ್ಪತ್ತೆಂಟು ಲಕ್ಷದ ತೊಂಬತ್ತೊಂಬತ್ತು ಸಾವಿರದ ಒಂಬೈನೂರ ತೊಂಬತ್ತೊಂಬತ್ತು ರೂಪಾಯಿಗಳು ಮಾತ್ರ) ಗಳನ್ನು 12 ಸಮಕಂತುಗಳ [illegible] ಸಮಕಂತುಗಳಿಗೆ ವಿಭಾಗಿಸಿ, ಗುತ್ತಿಗೆದಾರರಾದ ಶ್ರೀ ಹರಿಕಾಂತ್ ವೆಂಕಟೇಶ್, ಒಸಿಯನ್ ಅಡ್ವೆಂಚರ್ಸ್

# ರಿವರ್ ರ್‍ಯಾಫ್ಟಿಂಗ್ ನಿರ್ವಹಣೆ ಮತ್ತು ಮೇಲುಸ್ತುವಾರಿ ಸಮಿತಿ
## ಕೊಡಗು ಜಿಲ್ಲೆ, ಮಡಿಕೇರಿ

ಸಂಖ್ಯೆ:ರಿ.ರ್‍ಯಾನಿ.ಮೇ.ಸಮಿತಿ/ಕೊಡಗು/ಪರವಾನಗಿ-1/2021-22 ದಿನಾಂಕ:10-08-2021

## ಪರವಾನಗಿ ಪತ್ರ

ವಿಷಯ:- ಕೊಡಗು ವೈಟ್ ವಾಟರ್ ರಿವರ್ ರ್‍ಯಾಫ್ಟಿಂಗ್ ಪ್ರೈ.ಲಿ, ಕುಮಟೂರು, ಶ್ರೀಮಂಗಲ, ವಿರಾಜಪೇಟೆ ತಾಲ್ಲೂಕು ಇವರಿಗೆ ರಿವರ್ ರ್‍ಯಾಫ್ಟಿಂಗ್ ನಡೆಸಲು ಪರವಾನಗಿ/ಅನುಮತಿ ನೀಡುವ ಬಗ್ಗೆ.

ಉಲ್ಲೇಖ:-1. ಈ ಕಛೇರಿಯ ಪರವಾನಗಿ ಪತ್ರ ಸಂಖ್ಯೆ:ರಿ.ರ್‍ಯಾನಿ.ಮೇ.ಸಮಿತಿ/ಕೊಡಗು/ಪರವಾನಗಿ-1/2019-20 ದಿನಾಂಕ:20-06-2019

2. ದಿನಾಂಕ:27-11-20ರಂದು ನಡೆದ ರಿವರ್ ರ್‍ಯಾಫ್ಟಿಂಗ್ ನಿರ್ವಹಣೆ ಮತ್ತು ಮೇಲುಸ್ತುವಾರಿ ಸಮಿತಿ ಸಭೆಯ ನಡವಳಿ.

* * * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀ ಪಿ.ಬಿ ಪೂವಯ್ಯ, ಕೊಡಗು ವೈಟ್ ವಾಟರ್ ರಿವರ್ ರ್‍ಯಾಫ್ಟಿಂಗ್ ಪ್ರೈ.ಲಿ, ಕುಮಟೂರು, ಶ್ರೀಮಂಗಲ, ವಿರಾಜಪೇಟೆ ತಾಲ್ಲೂಕು, ಇವರು ವಿರಾಜಪೇಟೆ ತಾಲ್ಲೂಕು ಶ್ರೀಮಂಗಲ ಹೋಬಳಿಯ ವ್ಯಾಪ್ತಿಯಲ್ಲಿರುವ ಬರ್ಪುಹೊಳೆಯಲ್ಲಿ ರಿವರ್ ರ್‍ಯಾಫ್ಟಿಂಗ್ ನಡೆಸಲು ಪರವಾನಗಿ/ಅನುಮತಿ ನೀಡುವ ಸಂಬಂಧ ಉಲ್ಲೇಖ(1)ರ ಪತ್ರದಲ್ಲಿ ಒಂದು ವರ್ಷದ ಅವಧಿಗೆ ಪವಾನಗಿ/ಅನುಮತಿ ನೀಡಲಾಗಿದೆ. ರಿವರ್ ರ್‍ಯಾಫ್ಟಿಂಗ್ ನಿರ್ವಹಣೆ ಮತ್ತು ಮೇಲುಸ್ತುವಾರಿ ಸಮಿತಿಯು ಉಲ್ಲೇಖ(2)ರ ದಿನಾಂಕದಂದು ಸಭೆ ನಡೆಸಿ, ಅರ್ಜಿದಾರರು ಸಲ್ಲಿಸಿರುವ ಅರ್ಜಿಯು ಕ್ರಮಬದ್ಧವಾಗಿರುವುದರಿಂದ ಉಲ್ಲೇಖ(1)ರ ಪರವಾನಿಗೆಯಲ್ಲಿರುವ ಷರತ್ತು/ನಿಬಂಧನೆಗಳಿಗೆ ಒಳಪಟ್ಟು ಹಾಗೂ ಕೋವಿಡ್-19ಗೆ ಸಂಬಂಧಿಸಿದಂತೆ ಈ ಕೆಳಕಂಡ ಮಾರ್ಗಸೂಚಿಗಳನ್ನು ಪಾಲಿಸುವುದರೊಂದಿಗೆ ರಿವರ್ ರ್‍ಯಾಫ್ಟಿಂಗ್ ನಡೆಸಲು ಪರವಾನಗಿ/ಅನುಮತಿ ನೀಡಲಾಗಿದೆ.

1. ದಿ:20-06-2019ರಂದು ನೀಡಿರುವ ಪರವಾನಿಗೆಯ ಷರತ್ತುಗಳನ್ನು ಕಡ್ಡಾಯವಾಗಿ ಪಾಲಿಸುವುದು.
2. ಕೋವಿಡ್-19ಗೆ ಸಂಬಂಧಿಸಿದಂತೆ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಪಾಲಿಸುವುದು
3. ಒಂದು ಬೋಟ್‌ನಲ್ಲಿ 6 ಮಂದಿ ಪ್ರವಾಸಿಗರು ಮಾತ್ರ ತೆರಳುವುದು
4. ಮಾಸ್ಕ್ ಕಡ್ಡಾಯವಾಗಿ ಧರಿಸುವುದು.
5. ಪ್ರವಾಸಿಗರು ರಿವರ್ ರ್‍ಯಾಫ್ಟಿಂಗ್ ನಡೆಸಿದ ನಂತರ ಸ್ಯಾನಿಟೈಸರ್ ಸಿಂಪಡಿಸುವುದು.

ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು,
ರಿವರ್ ರ್‍ಯಾಫ್ಟಿಂಗ್ ನಿರ್ವಹಣೆ ಮತ್ತು ಮೇಲುಸ್ತುವಾರಿ ಸಮಿತಿ
ಕೊಡಗು ಜಿಲ್ಲೆ, ಮಡಿಕೇರಿ.

ಗೆ,

ಶ್ರೀ ಪಿ.ಬಿ ಪೂವಯ್ಯ,
ಕೊಡಗು ವೈಟ್ ವಾಟರ್ ರಿವರ್ ರ್‍ಯಾಫ್ಟಿಂಗ್ ಪ್ರೈ.ಲಿ,
ಕುಮಟೂರು, ಶ್ರೀಮಂಗಲ,
ವಿರಾಜಪೇಟೆ ತಾಲ್ಲೂಕು.

